# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 550
ಸದಸ್ಯರ ಹೆಸರು : ಶ್ರೀ ರಘುನಾಥ ರಾವ್ ಮಲ್ಕಾಪುರೆ
ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು,

ಉತ್ತರಿಸಬೇಕಾದ ದಿನಾಂಕ : 11.12.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ ಎಷ್ಟು; ಇಲ್ಲಿ ಕಲಿಯುತ್ತಿರುವ ಮಕ್ಕಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ: 65911<br><br>ಸದರಿ ಅಂಗನವಾಡಿ ಕೇಂದ್ರಗಳಲ್ಲಿ ಕಲಿಯುತ್ತಿರುವ ಮಕ್ಕಳ ಸಂಖ್ಯೆ: 1675413<br><br>ಜಿಲ್ಲಾವಾರು ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಿದೆ. |
| ಆ | ಈ ಕೇಂದ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆಯರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಸದರಿ ಕೇಂದ್ರಗಳಲ್ಲಿ 64249 ಅಂಗನವಾಡಿ ಕಾರ್ಯಕರ್ತೆಯರು ಸೇವೆ ಸಲ್ಲಿಸುತ್ತಿದ್ದಾರೆ. ಜಿಲ್ಲಾವಾರು ವಿವರಗಳನ್ನು **ಅನುಬಂಧ** ದಲ್ಲಿ ಒದಗಿಸಿದೆ. |
| ಇ | ಅಂಗನವಾಡಿ ಕಾರ್ಯಕರ್ತೆಯರಿಗೆ ಸರ್ಕಾರ ನೀಡುತ್ತಿರುವ ಗೌರವ ಧನ ಎಷ್ಟು; ಗೌರವ ಧನದ ಜೊತೆಗೆ ನೀಡುತ್ತಿರುವ ಇನ್ನಿತರೆ ಸೌಲಭ್ಯಗಳು ಯಾವುವು; | ಅಂಗನವಾಡಿ ಕಾರ್ಯಕರ್ತೆಯರಿಗೆ ಮಾಹೆಯಾನ ರೂ. 10,000/-ಗಳ ಗೌರವ ಧನ ನೀಡಲಾಗುತ್ತಿದೆ.<br><br>ಇದಲ್ಲದೇ ಅಂಗನವಾಡಿ ಕಾರ್ಯಕರ್ತೆಯರಿಗೆ ಪ್ರತಿ ವರ್ಷ 2 ಜೊತೆ ಸಮವಸ್ತ್ರ, ವೈದ್ಯಕೀಯ ವೆಚ್ಚ ಮರುಪಾವತಿ, ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ ಮತ್ತು ಭಾಗ್ಯಲಕ್ಷ್ಮಿ ಯೋಜನೆಯಡಿ ಫಲಾನುಭವಿಗಳನ್ನು ನೋಂದಾಯಿಸಿದ್ದಲ್ಲಿ, ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ.<br><br>ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರನ್ನು ಎನ್.ಪಿ.ಎಸ್.ಲೈಟ್ ಯೋಜನೆಯಡಿ ನೋಂದಾಯಿಸಲಾಗಿದೆ.<br><br>ಸೇವೆಯಲ್ಲಿರುವಾಗಲೇ ಮೃತಪಟ್ಟ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ಕುಟುಂಬದ ಅವಲಂಬಿತರಿಗೆ ರೂ.50,000/- ಮರಣ ಪರಿಹಾರ ನಿಧಿಯನ್ನು ಸಹ ನೀಡಲಾಗುತ್ತಿದೆ.<br><br>15 ದಿನಗಳ ಬೇಸಿಗೆ ರಜೆಯನ್ನು ನೀಡಲಾಗುತ್ತಿದೆ. |

| | | |
|---|---|---|
| ಈ | ಪ್ರತಿ ತಿಂಗಳು ಸಮಯಕ್ಕೆ ಸರಿಯಾಗಿ ಗೌರವ ಧನ ಪಾವತಿಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದಕ್ಕೆ ಕಾರಣಗಳೇನು; ಸಮಯಕ್ಕೆ ಸರಿಯಾಗಿ ಗೌರವ ಧನ ಪಾವತಿಸಲು ಕೈಗೊಂಡಿರುವ ಕ್ರಮಗಳೇನು; | ಇಲ್ಲ |
| ಉ | ಅಂಗನವಾಡಿ ಕಾರ್ಯಕರ್ತೆಯರ ಬೇಡಿಕೆಗಳೇನು; ಅವರ ಬೇಡಿಕೆಗಳನ್ನು ಈಡೇರಿಸಲು ಹಾಗೂ ಗೌರವಧನ ಹೆಚ್ಚಳ ಮಾಡುವ ಕುರಿತು ಸರ್ಕಾರದ ನಿಲುವೇನು? | ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರು ಅವರ ಸಂಘ ಸಂಸ್ಥೆಗಳ ಮೂಲಕ ಹಲವು ಬೇಡಿಕೆಗಳನ್ನು ಸಲ್ಲಿಸಿದ್ದು, ಈ ಪೈಕಿ ಸರ್ಕಾರಿ ನೌಕರರೆಂದು ಪರಿಗಣಿಸುವುದು ಪ್ರಮುಖ ಬೇಡಿಕೆಯಾಗಿರುತ್ತದೆ. ಅಂಗನವಾಡಿ ಕಾರ್ಯಕರ್ತೆಯರು ಗೌರವಧನದ ಆಧಾರದ ಮೇಲೆ ನೇಮಕ ಮಾಡಿರುವುದರಿಂದ ಸರ್ಕಾರಿ ನೌಕರರೆಂದು ಪರಿಗಣಿಸಲು ಬರುವುದಿಲ್ಲ. ಅದೂ ಅಲ್ಲದೆ ಈ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, ಕೇಂದ್ರ ಸರ್ಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.<br><br>ಅಕ್ಟೋಬರ್ 2019ರಲ್ಲಿ ಅಂಗನವಾಡಿ ಕಾರ್ಯಕರ್ತೆ ಮತ್ತು ಅಂಗನವಾಡಿ ಸಹಾಯಕಿಯರ ಗೌರವಧನವನ್ನು ಹೆಚ್ಚಿಸಿರುವುದರಿಂದ, ಪ್ರಸ್ತುತ ಸರ್ಕಾರದ ಮುಂದೆ ಈ ಕುರಿತಂತೆ ಯಾವುದೇ ಪ್ರಸ್ತಾವನೆಗಳು ಇರುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 233 ಐಸಿಡಿ 2020

<u>ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ರಘುನಾಥ ರಾವ್ ಮಲ್ಕಾಪೂರೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:550ಕ್ಕೆ ಅನುಬಂಧ</u>

ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆ ಮತ್ತು ಮಕ್ಕಳ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಕಾರ್ಯ ನಿರತ ಅಂಗನವಾಡಿ ಕೇಂದ್ರಗಳ ಸಂಖ್ಯೆ | ಕಲಿಯುತ್ತಿರುವ ಒಟ್ಟು ಮಕ್ಕಳ ಸಂಖ್ಯೆ (3 ರಿಂದ 6 ವರ್ಷ) | ಕಾರ್ಯನಿರತ ಅಂಗನವಾಡಿ ಕಾರ್ಯಕರ್ತೆಯರ ಸಂಖ್ಯೆ |
|---|---|---|---|---|
| 1 | ಬಾಗಲಕೋಟೆ | 2221 | 77192 | 2167 |
| 2 | ಬೆಂಗಳೂರು (ಗ್ರಾ) | 1229 | 20305 | 1207 |
| 3 | ರಾಮನಗರ | 1543 | 23438 | 1484 |
| 4 | ಬೆಂಗಳೂರು (ನ) | 2420 | 52585 | 2330 |
| 5 | ಬೆಳಗಾವಿ | 5294 | 172380 | 5178 |
| 6 | ಬಳ್ಳಾರಿ | 2784 | 107216 | 2780 |
| 7 | ಬೀದರ್ | 1893 | 41147 | 1762 |
| 8 | ವಿಜಯಪುರ | 2313 | 83355 | 2255 |
| 9 | ಚಾಮರಾಜನಗರ | 1421 | 26654 | 1363 |
| 10 | ಚಿಕ್ಕಮಗಳೂರು | 1825 | 25234 | 1777 |
| 11 | ಚಿತ್ರದುರ್ಗ | 2324 | 56450 | 2273 |
| 12 | ಮಂಗಳೂರು | 2104 | 78373 | 2088 |
| 13 | ದಾವಣಗೆರೆ | 1721 | 47154 | 1671 |
| 14 | ಧಾರವಾಡ | 1505 | 51165 | 1473 |
| 15 | ಗದಗ | 1166 | 41172 | 1120 |
| 16 | ಕಲಬುರಗಿ | 3098 | 85629 | 3029 |
| 17 | ಯಾದಗಿರಿ | 1386 | 69274 | 1368 |
| 18 | ಹಾಸನ | 2523 | 35581 | 2456 |
| 19 | ಹಾವೇರಿ | 1918 | 60212 | 1857 |
| 20 | ಕೋಲಾರ | 2061 | 31424 | 1999 |
| 21 | ಚಿಕ್ಕಬಳ್ಳಾಪುರ | 1961 | 40945 | 1914 |
| 22 | ಕೊಡಗು | 871 | 11197 | 853 |
| 23 | ಕೊಪ್ಪಳ | 1850 | 69693 | 1780 |
| 24 | ಮಂಡ್ಯ | 2546 | 34352 | 2470 |
| 25 | ಮೈಸೂರು | 2860 | 55575 | 2810 |
| 26 | ರಾಯಚೂರು | 2662 | 92343 | 2633 |
| 27 | ಶಿವಮೊಗ್ಗ | 2439 | 44057 | 2349 |
| 28 | ತುಮಕೂರು | 4095 | 63847 | 3998 |
| 29 | ಉಡುಪಿ | 1191 | 25301 | 1176 |
| 30 | ಉತ್ತರ ಕನ್ನಡ | 2687 | 52163 | 2629 |
| | ರಾಜ್ಯದ ಒಟ್ಟು | **65911** | **1675413** | **64249** |